# ಆಧುನಿಕ ತರಗತಿ ಕೊಠಡಿಗಳಲ್ಲಿ ಸಾಂಪ್ರದಾಯಿಕ ಜ್ಞಾನ

ನಮಾಮಿ ಶರ್ಮಾ

ಸುಮಾರು ಹದಿನೈದು ವರ್ಷಗಳ ಹಿಂದೆ ಪರಿಸರ ಸಂರಕ್ಷಣೆ ಮತ್ತು ಪುನರುಜ್ಜೀವನಕ್ಕಾಗಿ ಕಾರ್ಯನಿರತವಾಗಿದ್ದ ಸಂಘಟನೆಗಳೊಂದಿಗೆ ನಾನು ತೊಡಗಿಸಿಕೊಂಡಿದ್ದಾಗ ಅರಣ್ಯಗಳನ್ನು ಸಂರಕ್ಷಿಸುತ್ತಿದ್ದ ಹಲವು ಸಮುದಾಯಗಳ ಪರಿಚಯವಾಯಿತು. ಈ ಸಮುದಾಯಗಳು ಕಾಡುಗಳೊಂದಿಗೆ ಹೊಂದಿದ್ದ ಸಂಬಂಧ ನನ್ನನ್ನು ಆಕರ್ಷಿಸಿತ್ತು. ಅರಣ್ಯ ಸಂರಕ್ಷಣೆಯು ಧರ್ಮ, ಮೂಢನಂಬಿಕೆ, ಐತಿಹ್ಯ, ಪರಿಸರ ಸಂಬಂಧಿ ಸೌಕರ್ಯಗಳು ಮತ್ತು ಜೀವನೋಪಾಯದಂತಹ ಆಚರಣೆಗಳನ್ನು ಅವಲಂಬಿಸಿದ್ದರೂ, ಸಂರಕ್ಷಣಾ ವಿಧಾನಗಳೊಂದಿಗೆ ಗಾಢವಾಗಿ ಬೆಸೆದುಕೊಂಡಿರುವ ಈ ಆಚರಣೆಗಳು ಸಾಂಪ್ರದಾಯಿಕ ಜ್ಞಾನಪದ್ಧತಿಗಳನ್ನು ಜೀವಂತವಾಗಿಟ್ಟಿವೆ ಎಂಬುದನ್ನು ಅರಿತುಕೊಂಡೆ. ಸಾಂಪ್ರದಾಯಿಕ ಜ್ಞಾನವು ಸಂರಕ್ಷಣಾ ವಿಧಾನಗಳಂದ ಮೂಡಿದ್ದಷ್ಟೇ ಅಲ್ಲದೆ, ಪರಿಸರದ ಬಗ್ಗೆ ಅರಿವಿನ ಪ್ರಜ್ಞೆಗಳಗೆ ಕೊಡುಗೆ ನೀಡುತ್ತದೆ.

## ಭವಿಷ್ಯದ ಪರಿಸರ ಸಂಬಂಧಿ ನೈತಿಕತೆ

ನಾನು ಆ ಕ್ಷೇತ್ರಗಳಗೆ ಭೇಟಿ ಕೊಟ್ಟಾಗ, ಈ ಸಮುದಾಯಗಳ ಯುವ ಸದಸ್ಯರು ಅಲ್ಲಿನ ಹಿರಿಯರು ಹೇಳುತ್ತಿದ್ದಂತಹ ನಂಬಿಕೆ ವ್ಯವಸ್ಥೆಯನ್ನು ಹಂಚಿಕೊಳ್ಳದೇ ಇರುವುದನ್ನು ಗಮನಿಸಿದೆ. ಉತ್ತರಾಖಂಡದಲ್ಲಿ ಶಿಕ್ಷಣ ಪಡೆದು, ಬಿಳಿ ಕಾಲರಿನ ಕೆಲಸಗಳನ್ನು ಗಿಟ್ಟಿಸಿಕೊಂಡು, ಅಂತಿಮವಾಗಿ ವಲಸೆ ಹೋಗಿ ಬದುಕು ಕಟ್ಟಿಕೊಳ್ಳುವತ್ತ ಅವರ ಗಮನ ಇರುತ್ತದೆ. ಮಧ್ಯಪ್ರದೇಶದಲ್ಲಿ ಯಾದರೋ ಹಲವು ಅಂಶಗಳ ತಿಕ್ಕಾಟವನ್ನು ಕಾಣಬಹುದಾಗಿದೆ. ನಿರಂತರವಾಗಿ ವಿಸ್ತಾರಗೊಳ್ಳುತ್ತಿರುವ ಕಾನ್ಹಾ ರಾಷ್ಟ್ರೀಯ ಉದ್ಯಾನವನಕ್ಕೆ ಅಗತ್ಯವಿರುವ ಸಂರಕ್ಷಿತ ವಲಯದ ಬೇಡಿಕೆಯ ಕಾರಣದಿಂದಾಗಿ ಅಲ್ಲಿನ ಬೈಗಾ ಸಮುದಾಯವು ಅರಣ್ಯ-ಭೂಮಿಯನ್ನು ತೊರೆಯಬೇಕಾದ ಮತ್ತು ಸ್ಥಳಾಂತರದ ಆತಂಕಗಳನ್ನು ಎದುರಿಸುತ್ತಿತ್ತು. ರೆಸಾರ್ಟ್ ಮತ್ತು ಹೋಟೆಲ್‌ಗಳು ಭೂಮಿಯನ್ನು ಭೋಗ್ಯಕ್ಕೆ ಪಡೆದು, ಬೈಗಾ ಸಮುದಾಯದ ಜನರನ್ನು ಸಹಾಯಕ ಸಿಬ್ಬಂದಿಯಾಗಿ ನೇಮಿಸಿಕೊಳ್ಳಲು ಆರಂಭಿಸಿದವು. ನಿಧಾನವಾಗಿ ಅಲ್ಲಿನ ಯುವಪೀಳಿಗೆಯು ಕಾಡಿನೊಂದಿಗಿನ ತಮಗಿದ್ದ ಸಂಬಂಧ ಮತ್ತು ಒಕ್ಕಲುತನದ ಭಾವವನ್ನು ಕಳೆದುಕೊಳ್ಳತೊಡಗಿತು.

ಅರುಣಾಚಲ ಪ್ರದೇಶದಲ್ಲಿ ಅರಣ್ಯ ಪ್ರದೇಶವನ್ನು ವರ್ಗೀಕರಿಸದಿರುವುದರಿಂದ, ಅಲ್ಲಿ ಅದರ ಒಡೆತನವು ಸಮುದಾಯಕ್ಕೇ ಸೇರಿದೆ. ಅಲ್ಲಿನ ಯುವಪೀಳಗೆಯಲ್ಲಿ ಅರಣ್ಯ ಸಂರಕ್ಷಣೆಯ ಭಾವನೆಯು ಕುಸಿದಿದ್ದರೂ, ಧಾರ್ಮಿಕತೆಯ ಭಯವು ಇನ್ನೂ ಉಳಿದುಕೊಂಡಿರುವುದನ್ನು ಗಮನಿಸಿದೆ. ಒಂದು ಪ್ರಸಂಗದಲ್ಲಿ, ಅಲ್ಲಿನ ಗ್ರಾಮವೊಂದು ಸುರಂಗವೊಂದರ ನಿರ್ಮಾಣಕ್ಕಾಗಿ ಗುಡ್ಡ ಪ್ರದೇಶವನ್ನು ಭಾರತೀಯ ಸೇನೆಗೆ ಮಾರಾಟ ಮಾಡಿತು. ತದನಂತರ, ಆ ಗ್ರಾಮದ ಹಲವರು ಗಂಭೀರ ಅನಾರೋಗ್ಯಕ್ಕೆ ಒಳಗಾದರು. ಆಗ ಗ್ರಾಮಸ್ಥರು ತಾವು ಆ ಗುಡ್ಡವನ್ನು ಮಾರುವ ಮೂಲಕ ನಿಸರ್ಗಮಾತೆಗೆ 'ಅಪಮಾನ ಮಾಡಿದ್ದೇ ಇದಕ್ಕೆ ಕಾರಣ ಎಂದು ಭಾವಿಸಿದರು. ಆದರೆ, ಇಲ್ಲಿನ ಯುವಪೀಳಗೆಯು ನಿಧಾನವಾಗಿ ಸಾಂಪ್ರದಾಯಿಕ ಕಸುಬುಗಳಾದ ಬೇಸಾಯ, ಯಾಕ್ ಪ್ರಾಣಿ ಸಂಗೋಪನೆ ಮೊದಲಾದವುಗಳಂದ ದೂರಸರಿಯುತ್ತಿದೆ. ಯುವಪೀಳಗೆಗೂ ಅರಣ್ಯಕ್ಕೂ ನಡುವಿನ ಅಂತರ ಹೆಚ್ಚಾಗುತ್ತಿದೆ. ನಾನು ಹಲವು ಪ್ರದೇಶಗಳಲ್ಲಿ ಶಾಲೆಗಳನ್ನು ಸಂದರ್ಶಿಸಿ ಅಲ್ಲಿನ ಕಿರಿಯ ವಿದ್ಯಾರ್ಥಿಗಳೊಂದಿಗೆ ಒಡನಾಡಿದ್ದೇನೆ. ಆಧುನಿಕ ಶಾಲಾ ಪಠ್ಯಕ್ರಮವು ಸಾಂಪ್ರದಾಯಿಕ ಜ್ಞಾನಪದ್ಧತಿಗಳನ್ನು ಒಳಗೊಂಡಿರುವುದಾಗಲೀ, ಪರಿಸರ ಸಂಬಂಧಿನೈತಿಕತೆಯನ್ನು ಮಕ್ಕಳಲ್ಲಿ ಬಿತ್ತುವ ದಿಕ್ಕಿನಲ್ಲಿ ತೊಡಗಿಸಿ-ಕೊಂಡಿರುವುದಾಗಲೀ ವಿರಳ ಎಂಬುದನ್ನು ಅರಿತುಕೊಂಡೆ. ಶಾಲಾ ಶಿಕ್ಷಣದಲ್ಲಿ ಜ್ಞಾನಪದ್ಧತಿಗಳ ನಡುವೆ ಶ್ರೇಣೀಕರಣವಿದೆ ಎಂದು ಕೂಡ ಭಾವಿಸಿದೆ: ಸಾಂಪ್ರದಾಯಿಕ ಜ್ಞಾನಪದ್ಧತಿಯು ಹಿರಿಯ ಪೀಳಗೆಯ ವಿಶೇಷ ಲಕ್ಷಣವಾಗಿದೆ, ಯುವಪೀಳಗೆಯು ಅದರ ಬಗೆಗಿನ ತನ್ನ ಅಜ್ಞಾನವನ್ನು ಸಂಕೋಚವಿಲ್ಲದೆ ಒಪ್ಪಿಕೊಳ್ಳುತ್ತದೆ. ಮಕ್ಕಳಲ್ಲಿ ಪರಿಸರ ಸಂಬಂಧಿ ನೈತಿಕತೆಯನ್ನು ಮೂಡಿಸುವ ನಿಟ್ಟಿನಲ್ಲಿ ಸಾಂಪ್ರದಾಯಿಕ ಜ್ಞಾನಪದ್ಧತಿಗಿರುವ ಸಾಮರ್ಥ್ಯವನ್ನು ಗುರುತಿಸದೆ ಅದನ್ನು "ಪುರಾತನ ಚಿಂತನೆ"ಯೆಂದು ತಿರಸ್ಕರಿಲಾಗುತ್ತಿದೆ. ಉದಾಹರಣೆಗೆ, ಉತ್ತರಾಖಂಡದ ಕುಮಾಂವ್ ಪ್ರಾಂತ್ಯದ ವ್ಯಕ್ತಿಯೊಬ್ಬ ಸಾಂಪ್ರದಾಯಿಕ ಮೆಟ್ಟಿಲುಬಾವಿಗಳಲ್ಲಿ ನೀರಿನ ಮಟ್ಟವನ್ನು ಕಾಪಾಡಿಕೊಳ್ಳಲು ಓಕ್ ಮರಗಳಗಿರುವ ಮಹತ್ವವನ್ನು ಅರಿತಿರುತ್ತಾನೆ. ರಾಜ್ಯ ಶಾಲಾ ಪಠ್ಯಕ್ರಮದಲ್ಲಿ ಕಲಿಯುವ ಮಗುವೊಂದಕ್ಕೆ ಈ ಜ್ಞಾನವು ದೊರೆಯದೆ, ಓಕ್ ಅರಣ್ಯಗಳನ್ನು ಸಂರಕ್ಷಿಸುವ ಮಹತ್ವವನ್ನು ಅದು ತಿಳಯದೇ ಹೋಗಿ, ಕ್ರಮೇಣ, ವ್ಯವಸ್ಥಿತವಾಗಿ ಈ ಕಾಡುಗಳಂದ ಪ್ರತ್ಯೇಕಗೊಳ್ಳುತ್ತದೆ. ಹೀಗಾಗಿ, ತರಗತಿಗಳಲ್ಲಿ ಪರಿಸರ ಕೇಂದ್ರಿತ ಮಾದರಿಗಳನ್ನು ರಚಿಸಬಲ್ಲ ಹತ್ತು-ಹಲವಾರು ಚಟುವಟಿಕೆಗಳಲ್ಲಿ ಮಕ್ಕಳನ್ನು ತೊಡಗಿಸುವುದು ಅತ್ಯಗತ್ಯವಾಗಿ ಆಗಬೇಕಿದೆ. ಇದನ್ನು ಮಾಡುವುದು ಹೇಗೆ ಎಂಬುದೇ ತಕ್ಷಣದ ಪ್ರಶ್ನೆಯಾಗಿದೆ. ತರಗತಿಗಳಲ್ಲಿ ಶಿಕ್ಷಕರು ಮಾಹಿತಿ ಒದಗಿಸಿಕೊಡುವುದರಲ್ಲಿ ತೊಡಗಿರುತ್ತಾರೆ. ಉದಾಹರಣೆಗೆ, ಮಕ್ಕಳಗೆ ದ್ಯುತಿಸಂಶ್ಲೇಷಣೆಯ ವಿದ್ಯಮಾನದ ಬಗ್ಗೆ

ತಿಳಿದಿರಬಹುದು; ಆದರೆ, ಅದು ತಮ್ಮ ಬದುಕನ್ನು ಹೇಗೆ ಪ್ರಭಾವಿಸುತ್ತದೆ ಎಂಬುದು ತಿಳಿದಿರುವುದಿಲ್ಲ.

## ತರಗತಿಯ ಚಟುವಟಿಕೆಗಳು ಪರಿಸರ ಪ್ರಜ್ಞೆಯನ್ನು ಬಿತ್ತುವಂತಾಗಬೇಕು

### ನಮ್ಮ ಸ್ಥಳೀಯ "ಮಿತ್ರ"ರನ್ನು ಅರಿಯುವುದು

ಅರುಣಾಚಲ ಪ್ರದೇಶದ ಪಶ್ಚಿಮ ಕಾಮೆಂಗ್ ಜಿಲ್ಲೆಯಲ್ಲಿ ವಿಶ್ವ ವನ್ಯಜೀವಿ ನಿಧಿಯ (World Wildlife Fund- WWF) ತಂಡವು ಶಾಲೆಗಳಲ್ಲಿ ಆಕರ್ಷಕ ರೀತಿಯಲ್ಲಿ ತೊಡಗಿಸಿಕೊಂಡಿರುವುದನ್ನು ನೋಡಿದೆ. ಅವರು ಚುಕ್ಕೆಗಳನ್ನು ಸೇರಿಸುವ, ಪದಬಂಧ ಬಿಡಿಸುವ, ಬಿಟ್ಟ ಸ್ಥಳವನ್ನು ಬಣ್ಣಗಳಿಂದ ತುಂಬುವ, ಸಾಮ್ಯತೆಗಳನ್ನು ಪತ್ತೆಮಾಡುವ, ಖಾಲಿ ಸ್ಥಳ ತುಂಬುವ ಹಾಗೂ ಹೊಂದಿಸಿ ಬರೆಯಿರಿ ಚಟುವಟಿಕೆಗಳ ಪುಟ್ಟ ಪುಸ್ತಕಗಳೊಂದಿಗೆ ಬಂದಿದ್ದರು. ಈ ಎಲ್ಲಾ ಚಟುವಟಿಕೆಗಳೂ ಅವರ ಜಿಲ್ಲೆಯಲ್ಲಿನ ವನ್ಯಜೀವಿಗಳ ಬಗ್ಗೆ ಅರಿವನ್ನು ಮೂಡಿಸಲು ರೂಪಿಸಲ್ಪಟ್ಟಿದ್ದವು. ಉದಾಹರಣೆಗೆ, ಚಟುವಟಿಕೆಯೊಂದು ವಿಷಭರಿತ ಹಾಗೂ ವಿಷರಹಿತ ಹಾವುಗಳನ್ನು ಪ್ರತ್ಯೇಕಿಸುವುದಾಗಿತ್ತು ಮತ್ತು ಹಾವುಗಳ ಸಂರಕ್ಷಣೆ ಮಾಡುವುದು ಏಕೆ ಮುಖ್ಯ ಎಂಬ ವಿಚಾರಗಳನ್ನು ಒಳಗೊಂಡಿತ್ತು. ವಿಶ್ವ ವನ್ಯಜೀವಿ ನಿಧಿ ತಂಡದ ಸುಗಮಕಾರರು ಚಟುವಟಿಕೆಗಳನ್ನು ಕುರಿತಾಗಿ ತರಗತಿಗಳಲ್ಲಿ ಸಂವಾದಗಳನ್ನು ನಡೆಸಿದ್ದರು, ಅದನ್ನು ಮುಂದುವರಿಸುವಂತೆ ಶಿಕ್ಷಕರಿಗೆ ತರಬೇತಿ ನೀಡಿದ್ದರು. ಈ ಚಟುವಟಿಕೆಗಳಲ್ಲಿ ಪ್ರಾಣಿಗಳ ಸ್ಥಳೀಯ ಹೆಸರುಗಳನ್ನು ಬಳಸಲಾಗಿತ್ತು.

### ಒಣಸಸ್ಯ ಸಂಗ್ರಹಗಳು (Herbariums)

ವಿದ್ಯಾರ್ಥಿಗಳಿಗೆ ಸ್ಥಳೀಯ ಸಸ್ಯಸಂಪತ್ತಿನ ಪ್ರಭೇದಗಳನ್ನು ಸಂಗ್ರಹಿಸುವಂತೆ ಹೇಳಿ, ಸ್ಥಳೀಯ ಹೆಸರುಗಳೊಂದಿಗೆ ಒಣಸಸ್ಯ ಸಂಗ್ರಹಗಳನ್ನು ಅವರೇ ತಯಾರಿಸಿಕೊಳ್ಳಲು ಹೇಳಬಹುದು. ಅದರಲ್ಲಿ ಪ್ರತಿ ಪ್ರಭೇದದ ಮುಖ್ಯ ಗುಣಲಕ್ಷಣಗಳು ಹಾಗೂ ಬಳಕೆಯನ್ನು ನಮೂದಿಸಬಹುದು. ಈ ಪ್ರಕ್ರಿಯೆಯಲ್ಲಿ ಅವರು ಸಸ್ಯಗಳ ಹೆಸರು ಮತ್ತು ಉಪಯೋಗವನ್ನು ಕಲಿಯುತ್ತಾರಲ್ಲದೆ, ಅವನ್ನು ಗುರುತಿಸಿ ಪರಿಸರ ವ್ಯವಸ್ಥೆಯಲ್ಲಿ ಅವುಗಳ ಪಾತ್ರವನ್ನು ಅರ್ಥಮಾಡಿಕೊಳ್ಳುತ್ತಾರೆ.

### ಬಿತ್ತಿ ಬೆಳೆಯಿರಿ

ಪ್ರತಿ ಮಗುವಿಗೂ ಸಣ್ಣದೊಂದು ಮಡಿಕೆ ಮತ್ತು ಬೀಜಗಳನ್ನು ನೀಡಿ ಅವನ್ನು ಬೆಳೆಯಲು ನೆರವಾಗಬಹುದು. ಪ್ರತಿ ದಿನವೂ ಬೀಜ ಮೊಳಕೆಯೊಡೆಯುವ ಪ್ರಕ್ರಿಯೆಯನ್ನು ಗಮನಿಸಿ ದಾಖಲಿಸಲು ಮಗುವಿಗೆ ಹೇಳಬಹುದು. ಆ ಸಸ್ಯಕ್ಕೊಂದು ಹೆಸರನ್ನು ನೀಡಲು ಹೇಳಬಹುದು. ಸಸ್ಯ ಬೆಳೆದಂತೆ ಶಿಕ್ಷಕರು ಸಸ್ಯಗಳು ಉಸಿರಾಡುವ ಬಗ್ಗೆ, ಅದರ ಭಾವನೆಗಳ ಬಗ್ಗೆ, ಅದು ಹೇಗೆ ಸಂವಹನ ಮಾಡುತ್ತದೆ ಎಂಬ ಬಗ್ಗೆ ಮಕ್ಕಳೊಡನೆ ಸಂವಾದ ನಡೆಸಬಹುದು.

### ನಮ್ಮ ಸಜೀವ ಮಣ್ಣು

ಮಕ್ಕಳನ್ನು ಹೊರಗೆ ಕರೆದುಕೊಂಡು ಹೋಗಿ, ಅಗೆಯಲು ಹೇಳಿ, ಮಣ್ಣಿನಲ್ಲಿ ಅವರು ಕಾಣಬಹುದಾದ ಕೀಟಗಳು ಹಾಗೂ ಜಂತುಗಳನ್ನು ಗುರುತಿಸಲು ಹೇಳಬಹುದು. ಮಣ್ಣಿನ ಗುಣಮಟ್ಟವನ್ನು ಕಾಪಾಡಿಕೊಳ್ಳುವಲ್ಲಿ ಈ ಎಲ್ಲವುಗಳ ಪಾತ್ರವನ್ನು ಕುರಿತು ಶಿಕ್ಷಕರು ವಿವರಿಸಬಹುದು. ಈ ಚಟುವಟಿಕೆಯು 'ಮಣ್ಣು ಕೊಳಕು' ಎಂಬ ಗ್ರಹಿಕೆಯನ್ನು ಮಾರ್ಪಡಿಸಿ, ಕ್ರಮೇಣ, ಮಕ್ಕಳು ಮಣ್ಣಿನೊಂದಿಗೆ ಒಡನಾಡುವಾಗ ಯಾವುದೇ ಹಿಂಜರಿಕೆ ತೋರದಂತೆ ಆಗುತ್ತದೆ. ಮಕ್ಕಳು ಮಣ್ಣನ್ನು ಕೈಯಿಂದ ಮುಟ್ಟುವಾಗ ಅವರಿಗೆ ಆಗುವ ಭಾವನೆಗಳನ್ನು ವಿವರಿಸಲು ಹೇಳಬಹುದು.

### ನಮ್ಮ ಆಹಾರ ಬೆಳೆಯುವುದು

ನಾಗಾಲ್ಯಾಂಡಿನ ಕೊಹಿಮಾದ ವಿಸ್ವೇಮ ಗ್ರಾಮದ ಕ್ರೀಡಾಶಾಲೆಯಲ್ಲಿ ಮಧ್ಯಾಹ್ನದ ಬಿಸಿಯೂಟಕ್ಕೆ ವಿದ್ಯಾರ್ಥಿಗಳು ಶಾಲೆಯ ಹಿತ್ತಿಲಿನ ಸಣ್ಣ ತೋಟದಲ್ಲಿ ಬೆಳೆದ ತರಕಾರಿಗಳನ್ನು ಬಳಸುತ್ತಿರುವುದು ವೃತ್ತಪತ್ರಿಕೆಗಳಲ್ಲಿ ದೊಡ್ಡದಾಗಿ ವರದಿಯಾಗಿತ್ತು. ಸಾವಯವ ಗೊಬ್ಬರ ಬಳಸಿ ಮಕ್ಕಳು ತರಕಾರಿಗಳನ್ನು ಬೆಳೆದಿದ್ದರು, ಇದರಿಂದ ಮಕ್ಕಳು ಆಹಾರವನ್ನು ಬೆಳೆಯುವ ಬಗ್ಗೆಯಷ್ಟೇ ಅಲ್ಲದೆ ಸಾಂಪ್ರದಾಯಿಕ ಬೇಸಾಯ ಪದ್ಧತಿಯನ್ನೂ ತಿಳಿಯುವಂತಾಗುತ್ತದೆ. ಅವರು ಮಣ್ಣು ಮತ್ತು ಭೂಮಿ ತಾಯಿಯೊಂದಿಗೆ ಸದೃಢ ಸಂಬಂಧವೊಂದನ್ನು ಕಟ್ಟಿಕೊಳ್ಳುವಂತಾಗುತ್ತದೆ.

### ಒಂದು ಜಗತ್ತು, ಒಂದು ಕುಟುಂಬ

ಸ್ಥಳೀಯ ವೈವಿಧ್ಯಮಯ ಪರಿಸರ ವ್ಯವಸ್ಥೆಯನ್ನು ನೋಡಲು ಮಕ್ಕಳನ್ನು ಕ್ಷೇತ್ರ ಪ್ರವಾಸಗಳಿಗೆ ಕರೆದುಕೊಂಡು ಹೋಗಬಹುದು. ಉದಾಹರಣೆಗೆ, ಅರುಣಾಚಲ ಪ್ರದೇಶದ ಪಶ್ಚಿಮ ಕಾಮೆಂಗ್ ಜಿಲ್ಲೆಯ ತೆಂಬಾಂಗ್ ಗ್ರಾಮದ ಮಕ್ಕಳನ್ನು ಎತ್ತರದ ಬೆಟ್ಟಗಳಿಗೆ ಚಾರಣ ಕರೆದುಕೊಂಡು ಹೋಗಿ ಅವರು ಅಲ್ಲಿನ ಕಾಡುಗಳಲ್ಲಿ ನೋಡುವ ಜೀವ ಪ್ರಭೇದಗಳನ್ನು ಪಟ್ಟಿಮಾಡಲು ಹಾಗೂ ಅದೇ ಚಟುವಟಿಕೆಯನ್ನು ಅವರಿರುವ ಎಡೆಗಿಂತಲೂ ಕೆಳಮಟ್ಟದ ಸ್ಥಳಗಳಲ್ಲಿ ನಡೆಸಲು ಹೇಳಬಹುದು. ಇದು ವರ್ಗಪ್ರಭೇದ–ಸಂಬಂಧದ ಚಿತ್ರವೊಂದನ್ನು ಬಿಡಿಸಲು ಅನುಕೂಲವಾಗುತ್ತದೆ. ಈ ಚಿತ್ರದಲ್ಲಿ ಅವರು ಹಲವು ವಿಭಿನ್ನ ಎತ್ತರಗಳಲ್ಲಿ ಕಂಡುಬರುವ ಪ್ರಭೇದಗಳ ನಡುವಿನ ಸಂಬಂಧವನ್ನು ವಿವರಿಸಬಹುದು. ಇದರ ಬಳಿಕ ನಡೆಸಲಾಗುವ ಸಂವಾದದಲ್ಲಿ ಎಲ್ಲಾ ಜೀವಪ್ರಭೇದಗಳೂ ಹೇಗೆ ಒಂದೇ ಬೃಹತ್ ಕುಟುಂಬದ ಅಂಗವೆಂಬುದನ್ನು, ಎಲ್ಲಾ ಜೀವವರ್ಗಗಳನ್ನೂ ಸಂರಕ್ಷಿಸುವುದು ಏಕೆ ಮುಖ್ಯವೆಂಬುದನ್ನು ಮತ್ತಷ್ಟು ವಿಶದೀಕರಿಸಬಹುದು.




ಪರಿಸರ ವ್ಯವಸ್ಥೆ - ನಮ್ಮ ಬೃಹತ್ ಕುಟುಂಬ

**ಚಿತ್ರ 1. ಜೀವ ವೈವಿಧ್ಯವನ್ನು ಕಾಪಾಡಿಕೊಳ್ಳುವುದು ಏಕೆ ಮುಖ್ಯ ಎಂಬುದನ್ನು ಅರ್ಥಮಾಡಿಕೊಳ್ಳುವುದು**

ಒಂದು ಬೆಳೆಪದ್ಧತಿಯ (monocultures) ದೋಷವನ್ನು ತೋರಿಸಲು ಈ ಅಂದಿನ ಚಿತ್ರವನ್ನು ಬಳಸಬಹುದಾಗಿದೆ. ಈ ಚಿತ್ರದಲ್ಲಿ ಕೆಲವು ನಿರ್ದಿಷ್ಟ ತಳಗಳ ಸಂಖ್ಯೆಯನ್ನು ಹೆಚ್ಚಿಸಬಹುದಾಗಿದ್ದು, ಮಕ್ಕಳನ್ನು ಅದರ ಪರಿಣಾಮ ವರ್ಣಿಸುವಂತೆ ಕೇಳಬಹುದಾಗಿದೆ. ಉದಾಹರಣೆಗೆ ಎಲ್ಲಾ ಓಕ್ ಮರಗಳನ್ನು ಕತ್ತರಿಸಿ ಅದರ ಜಾಗದಲ್ಲಿ ಕೇವಲ ಪೈನ್ ಮರಗಳನ್ನು ಎತ್ತರದ ಸ್ಥಳಗಳಲ್ಲಿ ನೆಟ್ಟರೆ ಇದರಿಂದ ಯಾವ ಜೀವಪ್ರಭೇದಗಳ ಮೇಲೆ ನೇರ ದುಷ್ಪರಿಣಾಮ ಆಗುತ್ತದೆ? ಮಾನವರನ್ನೂ ಒಳಗೊಂಡಂತೆ "ಕುಟುಂಬ"ದ ಇತರ ಯಾವ ಸದಸ್ಯರ ಮೇಲೆ ಇದು ಬೀರಬಹುದಾದ ಪರಿಣಾಮ ಎಂತದ್ದು? ಜೀವ ವೈವಿಧ್ಯವನ್ನು ಕಾಪಾಡಿಕೊಳ್ಳುವುದರ ಮಹತ್ವವನ್ನು ಈ ರೀತಿ ವಿವರಿಸಬಹುದಾಗಿದೆ.

## ಜಾನಪದ ಕಥೆಗಳಲ್ಲಿ ಪರಿಸರವಾದ

ಮಕ್ಕಳಿಗೆ ಜಾನಪದ ಕಥೆಗಳನ್ನು ಸಂಗ್ರಹಿಸುವಂತೆ ಹೇಳಬಹುದು. ಶಿಕ್ಷಕರು ಒಂದು ಅವಧಿಯಲ್ಲಿ ಒಂದು ಕಥೆಯನ್ನು ಕೈಗೆತ್ತಿಕೊಳ್ಳಬಹುದು. ಈ ಸಾಂಪ್ರದಾಯಿಕ ಕಥೆಗಳಲ್ಲಿ ಪ್ರಕೃತಿಯ ಘಟಕಗಳಿಗೆ ಪ್ರಾಶಸ್ತ್ಯ ನೀಡುವ ವಿಧಾನದ ಬಗ್ಗೆ ಸಂವಾದವೊಂದನ್ನು ಸುಗಮಗೊಳಿಸಲು ಶಿಕ್ಷಕರು ಕಥೆಗಳನ್ನು ಮೊದಲೇ ವಿಶ್ಲೇಷಿಸಿ ತಯಾರಿ ಮಾಡಿಕೊಂಡಿರಬೇಕಾಗುತ್ತದೆ.

## ಹಬ್ಬಗಳು ಮತ್ತು ಪ್ರಕೃತಿ

ಸ್ಥಳೀಯ ಹಬ್ಬದ ದಿನಗಳಂದು ಪ್ರಕೃತಿಯೊಂದಿಗೆ ಸಂಯೋಜಿತಗೊಂಡಿರುವ ಆಚರಣೆಗಳನ್ನು ಗುರುತಿಸಲು ಮಕ್ಕಳಿಗೆ ಹೇಳಬಹುದು. ಶಿಕ್ಷಕರು ಇದಕ್ಕೆ ಸಂಬಂಧಿಸಿದ ಜೀವಪ್ರಭೇದಗಳ ಪ್ರಾಮುಖ್ಯ ಕುರಿತು ವಿವರಿಸಬಹುದು. ಬೋಧನೆ–ಕಲಿಕೆಯ ಪ್ರಕ್ರಿಯೆಯು ಮಕ್ಕಳಲ್ಲಿ ಸದೃಢ ಪರಿಸರ ಸಂಬಂಧಿ ನೈತಿಕ ಹೊಣೆಗಾರಿಕೆಯನ್ನು ಬಿತ್ತುವಲ್ಲಿ ನೆರವಾಗುತ್ತದೆ. ಇದು ಪರಿಸರದ ಬಗ್ಗೆ ಅರಿವಿನಿಂದ ಕೂಡಿದ ಭವಿಷ್ಯದ ಪೀಳಿಗೆಯ ಯುವಜನರನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಮಾನವಕೇಂದ್ರವಾದದ (anthropocentrism) ಎಡೆಯಲ್ಲಿ ಪರಿಸರಕೇಂದ್ರವಾದವನ್ನು (ecocentrism) ಪ್ರತಿಷ್ಠಾಪಿಸುವ ಪ್ರಕ್ರಿಯೆಯು ತರಗತಿಯಲ್ಲಿ ಮಾತ್ರ ಆರಂಭವಾಗಬಹುದು.



**ನಮಾಮಿ ಶರ್ಮಾ** ಅವರು ದೇಶದ ವಿವಿಧ ಭಾಗಗಳಲ್ಲಿ ಅರಣ್ಯ ಸಂರಕ್ಷಣೆಯ ಕ್ಷೇತ್ರದಲ್ಲಿ ಕಾರ್ಯನಿರತರಾಗಿದ್ದಾರೆ. ಸದ್ಯಕ್ಕೆ ಇವರು ತೇಜ್‌ಪುರ ವಿಶ್ವವಿದ್ಯಾಲಯದ ಸಮಾಜಕಾರ್ಯ ವಿಭಾಗದಲ್ಲಿ ಬೋಧಿಸುತ್ತಿದ್ದು, ತಮ್ಮ ವಿದ್ಯಾರ್ಥಿಗಳ ಪಾಲುದಾರಿಕೆಯೊಂದಿಗೆ ಅವರು ಈ ವಿಷಯದ ಅನ್ವೇಷಣೆಯನ್ನು ಮುಂದುವರಿಸಿದ್ದಾರೆ. ಅವರನ್ನು namamisharma@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಕುಶಾಲ್ ಬಿ.ಎಸ್.** | ಪರಿಶೀಲನೆ: **ನಾಗಮಣಿ ಎಸ್.ಎನ್.**